ಲಿಖಿತ ಮೂಲಕ ಉತ್ತರಿಸುವ ಪ್ರಶ್ನೆ



ಕರ್ನಾಟಕ ವಿಧಾನ ಪರಿಷತ್ತು

ನೂರ ನಲವತ್ತನೆಯ ಅಧಿವೇಶನ

ಮಂಗಳವಾರ, ದಿನಾಂಕ : 17 ನೇ ಮಾರ್ಚ್, 2020

ದಿ ಕರ್ನಾಟಕ ಸ್ಟೇಟ್ "ಡಿ" ಗ್ರೂಪ್ ಎಂಪ್ಲಾಯೀಸ್ ಸೆಂಟ್ರಲ್ ಅಸೋಸಿಯೇಷನ್ ಬೆಂಗಳೂರು ಇವರ ಅವ್ಯವಹಾರದ ಬಗ್ಗೆ

ಶ್ರೀ ಎನ್. ಅಪ್ಪಾಜಿಗೌಡ(ಸ್ಥಳೀಯ ಸಂಸ್ಥೆಗಳ ಕ್ಷೇತ್ರ):-

1034 (1282) ಮಾನ್ಯ ಸಹಕಾರ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ:-

(ಅ) ದಿ ಕರ್ನಾಟಕ ಸ್ಟೇಟ್ "ಡಿ" ಗ್ರೂಪ್ ಎಂಪ್ಲಾಯೀಸ್ ಸೆಂಟ್ರಲ್ ಅಸೋಸಿಯೇಷನ್ ಬಹುಮಹಡಿ ಕಟ್ಟಡ, ಬೆಂಗಳೂರು ಇವರು ರಾಜ್ಯದಲ್ಲಿ ಯಾವ ಯಾವ ಜಿಲ್ಲೆಗಳಲ್ಲಿ ವಸತಿ ನಿವೇಶನಗಳನ್ನು ರಚಿಸಿದ್ದಾರೆ ; ರಚಿಸಿದ್ದರೆ, ಎಷ್ಟು ಎಕರೆಗಳಲ್ಲಿ ನಿವೇಶನವನ್ನು ರಚಿಸಲಾಗಿದೆ ; (ಸಂಪೂರ್ಣ ಮಾಹಿತಿ ನೀಡುವುದು)

(ಆ) ಸದರಿ ಅಸೋಸಿಯೇಷನ್ ರವರು ಯಶವಂತಪುರ ಹೋಬಳಿ ಶ್ರೀಗಂಧದ ಕಾವಲ್‌ನಲ್ಲಿ ಹಾಗೂ ಇತರೆ ಕಡೆಗಳಲ್ಲಿ ನಿರ್ಮಿಸಿರುವ ನಿವೇಶನಗಳಿಗೆ ಸಂಬಂಧಪಟ್ಟಂತೆ ನಿವೇಶನದಾರರು, ಹಿಂದಿನ ಭೂಮಾಲೀಕರು, ಇತ್ಯಾದಿಯವರು ವಿವಿಧ ನ್ಯಾಯಾಲಯಗಳಲ್ಲಿ ಮೊಕದ್ದಮೆಗಳನ್ನು ಹೂಡಿರುವುದು ನಿಜವೇ ;

(ಇ) ಹಾಗಿದ್ದಲ್ಲಿ, ಬಡ ನಿವೇಶನದಾರರ ಹಿತ ಕಾಯಲು ದಿ ಕರ್ನಾಟಕ ಸ್ಟೇಟ್ `ಡಿ' ಗ್ರೂಪ್ ಎಂಪ್ಲಾಯೀಸ್ ಸೆಂಟ್ರಲ್ ಅಸೋಸಿಯೇಷನ್ ಕೈಗೊಂಡಿರುವ ಕ್ರಮಗಳೇನು ;

(ಈ) ಈ ಅಸೋಸಿಯೇಷನ್‌ನವರು ವಾರ್ಷಿಕ ಲೆಕ್ಕಪತ್ರಗಳನ್ನು ಸಮರ್ಪಕವಾಗಿ ನಿರ್ವಹಿಸಿದ್ದಾರೆಯೇ ಹಾಗೂ ಕಾಲಕಾಲಕ್ಕೆ ಆಡಿಟ್ ಮಾಡಲಾಗಿದೆಯೇ ; ಕಳೆದ 5 ವರ್ಷದ ಆಡಿಟ್ ವರದಿ ನೀಡುವುದು ;

(ಉ) ಸದರಿ ಅಸೋಸಿಯೇಷನ್‌ನ ಹಾಲಿ ಅಧ್ಯಕ್ಷರ ವಿರುದ್ಧ ವಿವಿಧ ನ್ಯಾಯಾಲಯಗಳಲ್ಲಿ ಕ್ರಿಮಿನಲ್ ಮತ್ತು ಸಿವಿಲ್ ಮೊಕದ್ದಮೆಗಳು ಬಾಕಿ ಇರುವುದು ನಿಜವೇ ; (ವಿವರ ನೀಡುವುದು)

(ಊ) ಹಾಗಿದ್ದಲ್ಲಿ, ಹಾಲಿ ಅಧ್ಯಕ್ಷರು ಮತ್ತು ಆಡಳಿತ ಮಂಡಳಿ ಸದಸ್ಯರ ವಿರುದ್ಧ ಸಹಕಾರ ಇಲಾಖೆಯ ಮುಖಾಂತರ ಮತ್ತು ಸಿ.ಸಿ.ಎ. ನಿಯಮಾವಳಿಗಳ ಪ್ರಕಾರ ಸರ್ಕಾರ ಕೈಗೊಂಡಿರುವ ಕ್ರಮವೇನು;

(ಋ) ದಿ ಕರ್ನಾಟಕ ಸ್ಟೇಟ್ "ಡಿ" ಗ್ರೂಪ್ ಎಂಪ್ಲಾಯೀಸ್ ಸೆಂಟ್ರಲ್ ಅಸೋಸಿಯೇಷನ್ ನ್ಯಾಯಾಲಯದಲ್ಲಿ ಪ್ರಕರಣಗಳನ್ನು ಸಮರ್ಪಕವಾಗಿ ನಿರ್ವಹಿಸದ ಕಾರಣ ಬಡ ನಿವೇಶನದಾರರುಗಳಿಗೆ ತೊಂದರೆಯಾಗಿದ್ದು, ಈ ಅಸೋಸಿಯೇಷನ್‌ಗೆ ಆಡಳಿತಾಧಿಕಾರಿಯನ್ನು ನೇಮಿಸಿ ಸದಸ್ಯರ ಹಿತ ಕಾಯಲಾಗುವುದೇ?